RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜನವರಿ ೩೧, ೨೦೧೩ (ಮಾಘ ೧೧ , ಶಕ ವರ್ಷ ೧೯೩೪)<br>Bangalore, Thursday, January 31, 2013 (Magha ,11 Shaka Varsha 1934) | ಸಂಚಿಕೆ ೫<br>Issue 5 |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸರ್ಕಾರಿ ಮತ್ತು ಸರ್ಕಾರಿ ಸ್ವಾಯತ್ತ ವೈದ್ಯಕೀಯ / ದಂತ ವಿಜ್ಞಾನ ಕಾಲೇಜುಗಳ ಹಾಗೂ ಸ್ವಾಯತ್ತ ವೈದ್ಯಕೀಯ ಸಂಸ್ಥೆಗಳ ಬೋಧಕ ಸಿಬ್ಬಂದಿಗೆ 2006 ರ ಪರಿಷ್ಕೃತ ಎಐಸಿಟಿಇ ವೇತನ ಶ್ರೇಣಿಯನ್ನು ವಿಸ್ತರಿಸಿ ಹೊರಡಿಸಲಾಗಿರುವ ದಿನಾಂಕ 16.12.2011 ರ ಆದೇಶವನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆಕುಕ 4 ಎಂಎಂಸಿ 10, ದಿನಾಂಕ 16.12.2011.
2. ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ವೈಶಿನಿ / ಎಂಇಎಸ್ (2) 48 / 2010–11, ದಿನಾಂಕ 27.12.2011.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಸ್ವಾಯತ್ತ ವೈದ್ಯಕೀಯ ಕಾಲೇಜುಗಳು, ಸರ್ಕಾರಿ ಸ್ವಾಯತ್ತ ದಂತ ವಿಜ್ಞಾನ ಕಾಲೇಜುಗಳು ಮತ್ತು ಸರ್ಕಾರಿ ಸ್ವಾಯತ್ತ ವೈದ್ಯಕೀಯ ಸಂಸ್ಥೆಗಳಾದ ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ನೆಫ್ರೋ–ಯುರಾಲಜಿ ಸಂಸ್ಥೆ, ಎಸ್.ಡಿ.ಎಸ್.ಟಿ.ಬಿ. ಸಂಶೋಧನಾ ಕೇಂದ್ರ ಮತ್ತು ರಾಜೀವ್ ಗಾಂಧಿ ಎದೆ ರೋಗಗಳ ಸಂಸ್ಥೆ, ಬೆಂಗಳೂರು ಹಾಗೂ ಧಾರವಾಡ ಮಾನಸಿಕ ಆರೋಗ್ಯ ಮತ್ತು ನರರೋಗ ವಿಜ್ಞಾನಗಳ ಸಂಸ್ಥೆ, ಧಾರವಾಡ ಈ ಸಂಸ್ಥೆಗಳಲ್ಲಿನ ಕೆಳಕಂಡ ಬೋಧಕ ವರ್ಗದವರಿಗೆ ಮತ್ತು ಸದರಿ ಸಂಸ್ಥೆಗಳಲ್ಲಿ ಸರ್ಕಾರಿ ಸೇವೆಯಲ್ಲಿ ಮುಂದುವರಿಯುತ್ತಿರುವ ಬೋಧಕ ವರ್ಗದವರಿಗೆ **ದಿನಾಂಕ 01.04.2011** ರಿಂದ ಅನ್ವಯವಾಗುವಂತೆ 2006 ರ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತಿನ (AICTE) ಪರಿಷ್ಕೃತ ವೇತನ ಶ್ರೇಣಿಗಳನ್ನು ಕೆಲವೊಂದು ಷರತ್ತು ಮತ್ತು ನಿಬಂಧನೆಗಳೊಂದಿಗೆ ಈ ಕೆಳಕಂಡಂತೆ ವಿಸ್ತರಿಸಿ ಆದೇಶಿಸಿದೆ.

| ಕ್ರ. ಸಂ. | ವೃಂದದ ಪದನಾಮ | ಈಗ ಬರುವ ಶ್ರೇಣಿ | ನೂತನ ಶ್ರೇಣಿ | |
|---|---|---|---|---|
| | | ವೇತನ ಶ್ರೇಣಿ | ಹೊಸ ವೇತನ ಶ್ರೇಣಿ ಬ್ಯಾಂಡ್ ರೂ. | ಅಕಾಡೆಮಿಕ್ ಗ್ರೇಡ್ ವೇತನ ರೂ. |
| 1. | ಉಪನ್ಯಾಸಕರು ಹಾಗೂ ಸೀನಿಯರ್ ರೆಸಿಡೆಂಟ್ ಮತ್ತು ಪರ್ಮನೆಂಟ್ ಟ್ಯೂಟರ್ (with Post Graduate Master Degree). | 8000–13500 | 15600–39100 | 6000 |
| 2. | ಸಹಾಯಕ ಪ್ರಾಧ್ಯಾಪಕರು | 12000 –18300 | 15600–39100 | 8000 |
| 4. | ಸಹ ಪ್ರಾಧ್ಯಾಪಕರು | 16400 –20000 | 37400–67000 | 9000 |
| 5. | ಪ್ರಾಧ್ಯಾಪಕರು, ನಿರ್ದೇಶಕರು ಮತ್ತು ಡೀನ್, ನಿರ್ದೇಶಕರು ಮತ್ತು ಪ್ರಾಂಶುಪಾಲರು | 18400–22400 | 37400–67000 | 10000 |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು ಇವರು ಸರ್ಕಾರಿ ಸ್ವಾಯತ್ತ ವೈದ್ಯಕೀಯ / ದಂತ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಭಾರತೀಯ ವೈದ್ಯಕೀಯ / ದಂತ ಪರಿಷತ್ತಿನ ನಿಯಮಗಳನ್ವಯ ಟ್ಯೂಟರ್ಸ್, ಜೂನಿಯರ್ ರೆಸಿಡೆಂಟ್ಸ್, ಸಹಾಯಕ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಹಾಗೂ ಪ್ರಾಧ್ಯಾಪಕರ ಹುದ್ದೆಗಳನ್ನು ಹೊಂದಿದ್ದು, ಸರ್ಕಾರದ ಆದೇಶ ಸಂಖ್ಯೆ:ಆಕುಕ 207 ಎಂಎಂಸಿ 2006, ದಿನಾಂಕ 19.05.2007 ರಲ್ಲಿ ಟ್ಯೂಟರ್ಸ್ ಹಾಗೂ ಜೂನಿಯರ್ ರೆಸಿಡೆಂಟ್ಸ್ ಹುದ್ದೆಗಳನ್ನು ಗುತ್ತಿಗೆ ಆಧಾರದ ಹುದ್ದೆಗಳೆಂದು ಪರಿಗಣಿಸಿ ಸದರಿಯವರಿಗೆ ಮಾಹೆಯಾನ ಮೊದಲನೆ ವರ್ಷ ರೂ.15,000/- ಎರಡನೇ ವರ್ಷ ರೂ.16,000/– ಮೂರನೇ ವರ್ಷ ರೂ.17,000/– ಗಳ ಕ್ರೂಢೀಕೃತ ವೇತನವನ್ನು ನಿಗದಿಪಡಿಸಿದ್ದು, ಇದರ ಜೊತೆಯಲ್ಲಿ ಈ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ನಾತಕೋತ್ತರ ಪದವಿ / ಡಿಪ್ಲೊಮಾ ಪದವಿಯನ್ನು ಹೊಂದಿರುವವರಿಗೆ ಮಾಹೆಯಾನ ಹೆಚ್ಚುವರಿಯಾಗಿ ರೂ.5,000/– ಗಳನ್ನು ನೀಡಲು ಆದೇಶಿಸಲಾಗಿದೆಯೆಂದು, ಸೀನಿಯರ್ ರೆಸಿಡೆಂಟ್ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಪರಿಗಣಿಸಿ ರೂ.8000–13125 ರ ವೇತನ ಶ್ರೇಣಿಯನ್ನು ನಿಗದಿಪಡಿಸಲಾಗಿರುತ್ತದೆಂದು ತಿಳಿಸಿರುತ್ತಾರೆ.

ಆದರೆ, ಸರ್ಕಾರವು ಈ ಆದೇಶವನ್ನು ಹೊರಡಿಸುವುದಕ್ಕಿಂತ ಮೊದಲು ಕಿಮ್ಸ್, ಹುಬ್ಬಳ್ಳಿ ಮತ್ತು ವಿಮ್ಸ್, ಬಳ್ಳಾರಿ ಈ ಸಂಸ್ಥೆಗಳಲ್ಲಿ ಟ್ಯೂಟರ್‌ಗಳನ್ನು ಖಾಯಂಆಗಿ ನೇಮಿಸಿಕೊಳ್ಳಲಾಗಿದ್ದು, ಇವರಿಗೆ ರೂ.8000–13500 ಗಳ ವೇತನ ಶ್ರೇಣಿಯನ್ನು ನಿಗದಿಪಡಿಸಲಾಗಿದೆಯೆಂದು, ಆದರೆ, ವೈದ್ಯಕೀಯ / ದಂತ ಕಾಲೇಜುಗಳ ಬೋಧಕ ಸಿಬ್ಬಂದಿಗಳಿಗೆ ಸರ್ಕಾರಿ ಆದೇಶದಲ್ಲಿ ಪರಿಷ್ಕೃತ AICTE ವೇತನವನ್ನು ನೀಡಿದ್ದು, ಮೇಲ್ಕಂಡ ಸರ್ಕಾರಿ ಆದೇಶದಲ್ಲಿ ಖಾಯಂ ಟ್ಯೂಟರ್ಸ್, ಜೂನಿಯರ್ ರೆಸಿಡೆಂಟ್ಸ್, ಸೀನಿಯರ್ ರೆಸಿಡೆಂಟ್ಸ್ ಹಾಗೂ ಜನರಲ್ ಡ್ಯೂಟಿ ಮೆಡಿಕಲ್ ಆಫೀಸರ್ಸ್ ಹಾಗೂ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಟ್ಯೂಟರ್ಸ್ ಹಾಗೂ ಜೂನಿಯರ್ ರೆಸಿಡೆಂಟ್‌ಗಳಿಗೆ ಪರಿಷ್ಕೃತ ವೇತನವನ್ನು ನೀಡಿರುವುದಿಲ್ಲವೆಂದು, ತತ್ಸಂಬಂಧ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜಿನ ಸಿಬ್ಬಂದಿಗಳು ತಮ್ಮ ವೇತನವನ್ನು ಪರಿಷ್ಕರಿಸುವಂತೆ ಕೋರಿ ಮನವಿಯನ್ನು ಸಲ್ಲಿಸಿದ್ದು, ಈ ಸಿಬ್ಬಂದಿಗಳ ವೇತನವನ್ನು ಕೆಳಕಂಡಂತೆ ಪರಿಷ್ಕರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರ. ಸಂ. | ವೃಂದದ ಪದನಾಮ | ಹಾಲಿ ಪಡೆಯುತ್ತಿರುವ ವೇತನ | ಶಿಫಾರಸ್ಸು ಮಾಡಲಾಗಿರುವ ಕ್ರೂಡೀಕೃತ ವೇತನ / ವೇತನ ಶ್ರೇಣಿ |
|---|---|---|---|
| 1. | ಗುತ್ತಿಗೆ ಆಧಾರದ ಟ್ಯೂಟರ್ಸ್ / ಜೂನಿಯರ್ ರೆಸಿಡೆಂಟ್ಸ್ | ಮೊದಲನೇ ವರ್ಷ–15600<br>ಎರಡನೇ ವರ್ಷ–16000<br>ಮೂರನೇ ವರ್ಷ–17000<br>(ಸ್ನಾತಕೋತ್ತರ ಪದವಿ / ಡಿಪ್ಲೊಮಾ ಹೊಂದಿದವರಿಗೆ) ಹೆಚ್ಚುವರಿ ಭತ್ಯೆ ರೂ.5000 | ಮೊದಲನೇ ವರ್ಷ–30000<br>ಎರಡನೇ ವರ್ಷ–31000<br>ಮೂರನೇ ವರ್ಷ–32000<br>(ಸ್ನಾತಕೋತ್ತರ ಪದವಿ / ಡಿಪ್ಲೊಮಾ ಹೊಂದಿದವರಿಗೆ) ಹೆಚ್ಚುವರಿ ಭತ್ಯೆ ರೂ.5000 |
| 2. | ಖಾಯಂ ಟ್ಯೂಟರ್ಸ್(ಎಂಬಿಬಿಎಸ್ / ಬಿಡಿಎಸ್ / ಪಿಜಿ ಡಿಪ್ಲೊಮಾ) | ರೂ.8000–275–13500 | ಎಂಬಿಬಿಎಸ್ / ಬಿಡಿಎಸ್ ಪದವಿಯನ್ನು ಹೊಂದಿದ ವೈದ್ಯರಿಗೆ 15600–39100 ಗಳೊಂದಿಗೆ ಶೈಕ್ಷಣಿಕ ಗ್ರೇಡ್ ಪೇ ರೂ.4000/– ಹಾಗೂ ಪಿ.ಜಿ. ಡಿಪ್ಲೊಮಾ ಹೊಂದಿರುವ ವೈದ್ಯರಿಗೆ 15600–39100 ಗಳೊಂದಿಗೆ ಶೈಕ್ಷಣಿಕ ಗ್ರೇಡ್ ಪೇ ರೂ.5000/– |

ಮುಂದುವರಿದು, ಇದರ ಜೊತೆಗೆ ಸದರಿಯವರಿಗೆ ರೂ.8000/ ಗಳ ಮಾಹೆಯಾನ ನಾನ್ ಪ್ರಾಕ್ಟೀಸ್ ಭತ್ಯೆಯನ್ನು ಐಚ್ಛಿಕವಾಗಿ ಕೊಡಬಹುದಾಗಿದ್ದು, ವೈದ್ಯಕೀಯ / ದಂತ ಸಿಬ್ಬಂದಿಗಳಿಗೆ (ಎಂಬಿಬಿಎಸ್ / ಬಿಡಿಎಸ್ ಪದವಿ ಹೊಂದಿದವರಿಗೆ) ಒಂದೇ ಹುದ್ದೆಯಲ್ಲಿ ತೃಪ್ತಿಕರವಾಗಿ 5 ವರ್ಷಗಳ ಸೇವೆ ಪೂರೈಸಿದ ನಂತರ ಇವರ ಶೈಕ್ಷಣಿಕ Grade Pay ಅನ್ನು ರೂ.4,000/– ಗಳಿಂದ ರೂ.6,000/– ಗಳಿಗೆ ಮಾಹೆಯಾನ ಹೆಚ್ಚಳ ಮಾಡಬಹುದಾಗಿದೆಯೆಂದು, ಇದೇ ರೀತಿಯಾಗಿ ಪಿ.ಜಿ. ಡಿಪ್ಲೊಮಾ ಹೊಂದಿದವರಿಗೆ ಒಂದೇ ಹುದ್ದೆಯಲ್ಲಿ ತೃಪ್ತಿಕರವಾಗಿ 5 ವರ್ಷಗಳ ಸೇವೆ ಪೂರೈಸಿದ ನಂತರ ಇವರ ಶೈಕ್ಷಣಿಕ Grade Pay ಅನ್ನು ರೂ.5,000/– ಗಳಿಂದ ರೂ.7,000/– ಗಳಿಗೆ ಮಾಹೆಯಾನ ಏರಿಸಬಹುದಾಗಿದ್ದು, ಎಂಬಿಬಿಎಸ್ / ದಂತ ವೈದ್ಯಕೀಯ ಸಿಬ್ಬಂದಿಗಳಿಗೆ ಅದೇ ಹುದ್ದೆಯಲ್ಲಿ ಮುಂದುವರಿದಿದ್ದಲ್ಲಿ 10 ವರ್ಷಗಳ ತೃಪ್ತಿಕರ ಸೇವೆ ಸಲ್ಲಿಸಿದ ಮೇಲೆ ಶೈಕ್ಷಣಿಕ Grade Pay ಅನ್ನು ಮಾಹೆಯಾನ ರೂ.6,000/– ಗಳಿಂದ ರೂ.8,000/– ಗಳಿಗೆ ಏರಿಸುವಂತೆ ಶಿಫಾರಸ್ಸು ಮಾಡುತ್ತಾ, ಅದೇ ರೀತಿ ಪಿಜಿ ಡಿಪ್ಲೊಮಾ ಹೊಂದಿದವರಿಗೆ 10 ವರ್ಷಗಳ ತೃಪ್ತಿಕರ ಸೇವೆ ಸಲ್ಲಿಸಿದ ನಂತರ ಶೈಕ್ಷಣಿಕ ಉಡಿಚಿಜಜ ಕಚಿಥಿ ಅನ್ನು ಮಾಹೆಯಾನ ರೂ.7,000/– ಗಳಿಂದ ರೂ.9,000/– ಗಳಿಗೆ ಏರಿಸ ಬಹುದಾಗಿದೆಯೆಂದೂ ಶಿಫಾರಸ್ಸು ಮಾಡಿರುತ್ತಾರೆ. ಈ ವೇತನ ಪರಿಷ್ಕರಣೆಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ಅಡಿಯಲ್ಲಿ ಬರುವ ಎಲ್ಲಾ ವೈದ್ಯಕೀಯ / ದಂತ ವೈದ್ಯಕೀಯ ಹಾಗು ಇತರೆ ಸ್ವಾಯತ್ತ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಟ್ಯೂಟರ್ಸ್ / ಜೂನಿಯರ್ ರೆಸಿಡೆಂಟ್ಸ್ / ಸೀನಿಯರ್ ರೆಸಿಡೆಂಟ್ಸ್‌ಗಳಿಗೆ ಅನ್ವಯವಾಗುವಂತೆ ಜಾರಿಗೊಳಿಸಲು ವೈದ್ಯಕೀಯ ಶಿಕ್ಷಣ ನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಸರ್ಕಾರದ ಆದೇಶ ಸಂಖ್ಯೆ: ಆಕುಕ 4 ಎಂಎಂಸಿ 2010, ದಿನಾಂಕ 16.12.2011 ರ ಆದೇಶ ಭಾಗವನ್ನು ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 320 ಎಂಎಂಸಿ 2011, ಬೆಂಗಳೂರು, ದಿನಾಂಕ 16–10–2012**

ಸರ್ಕಾರದ ಆದೇಶ ಸಂಖ್ಯೆ:ಆಕುಕ 4 ಎಂಎಂಸಿ 2010, ದಿನಾಂಕ 16.12.2011 ರಲ್ಲಿನ ಆದೇಶ ಭಾಗವನ್ನು ಕೆಳಕಂಡಂತೆ ಮಾರ್ಪಡಿಸಿ ಆದೇಶಿಸಿದೆ.

ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಸ್ವಾಯತ್ತ ವೈದ್ಯಕೀಯ ಕಾಲೇಜುಗಳು, ಸರ್ಕಾರಿ ಸ್ವಾಯತ್ತ ದಂತ ವಿಜ್ಞಾನ ಕಾಲೇಜುಗಳು ಮತ್ತು ಸ್ವಾಯತ್ತ ವೈದ್ಯಕೀಯ ಸಂಸ್ಥೆಗಳಾದ ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ನೆಫ್ರೋ–ಯುರಾಲಜಿ ಸಂಸ್ಥೆ, ಎಸ್.ಡಿ.ಎಸ್.ಟಿ.ಬಿ. ಸಂಶೋಧನಾ ಕೇಂದ್ರ ಮತ್ತು ರಾಜೀವ್ ಗಾಂಧಿ ಎದೆ ರೋಗಗಳ ಸಂಸ್ಥೆ, ಬೆಂಗಳೂರು ಹಾಗೂ ಧಾರವಾಡ ಮಾನಸಿಕ ಆರೋಗ್ಯ ಮತ್ತು ನರರೋಗ ವಿಜ್ಞಾನಗಳ ಸಂಸ್ಥೆ, ಧಾರವಾಡ ಈ ಸಂಸ್ಥೆಗಳಲ್ಲಿನ ಖಾಯಂ ಸೀನಿಯರ್ ರೆಸಿಡೆಂಟ್ಸ್‌ಗಳನ್ನು ಖಾಯಂ ಟ್ಯೂಟರ್ ಹುದ್ದೆಗಳೆಂದು ಪದನಾಮೀಕರಿಸಲು ಮತ್ತು ಖಾಯಂ ಟ್ಯೂಟರ್ ಹುದ್ದುಗೆ **ದಿನಾಂಕ 01.04.2011** ರಿಂದ ಅನ್ವಯವಾಗುವಂತೆ 2006 ರ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತಿನ (AICTE) ಪರಿಷ್ಕೃತ ವೇತನ ಶ್ರೇಣಿಗಳನ್ನು ಕೆಳಕಂಡಂತೆ ನಿಗಧಿಪಡಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ವೃಂದದ ಪದನಾಮ | ವೇತನ ಶ್ರೇಣಿ ರೂ. | ಅಕಾಡೆಮಿಕ್ ಗ್ರೇಡ್ ವೇತನ ರೂ. |
|---|---|---|---|
| 1. | ಖಾಯಂ ಟ್ಯೂಟರ್ಸ್ | 15600–39100 | 2000 |

ಮುಂದುವರಿದು, ದಿನಾಂಕ 19.05.2007 ರಂದು ಹಾಗೂ ತದನಂತರದಲ್ಲಿ ನೇಮಕಾತಿ ಹೊಂದಿದ ಜೂನಿಯರ್ ರೆಸಿಡೆಂಟ್ಸ್ ಹಾಗೂ ಟ್ಯೂಟರ್‌ಗಳಿಗೆ ಈಗಾಗಲೇ ನಿಗದಿಪಡಿಸಿರುವ ಸಂಚಿತ ವೇತನವನ್ನು ಈ ಕೂಡಲೇ ಜಾರಿಗೆ ಬರುವಂತೆ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಿದೆ.

| ಅವಧಿ | ಹಿಂದಿನ ಸಂಚಿತ ವೇತನ (ರೂ. ಗಳಲ್ಲಿ) | ಪರಿಷ್ಕರಿಸಲಾದ ಸಂಚಿತ ವೇತನ(ರೂ. ಗಳಲ್ಲಿ) |
|---|---|---|
| ಮೊದಲನೇ ವರ್ಷ | 15000 per month | 29000 per month |
| ಎರಡನೇ ವರ್ಷ | 16000 per month | 30000 per month |
| ಮೂರನೇ ವರ್ಷ | 17000 per month | 31000 per month |

ಇನ್ನುಳಿದಂತೆ, ಸರ್ಕಾರದ ಆದೇಶ ಸಂಖ್ಯೆ:ಆಕುಕ 4 ಎಂಎಂಸಿ 2010, ದಿನಾಂಕ 16.12.2011 ರ ಆದೇಶ ಹಾಗೂ ಇತರೆ ಎಲ್ಲಾ ಷರತ್ತು ಮತ್ತು ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: FD 255 Ser.2 / 2011, ದಿನಾಂಕ 07.08.2012 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮೆಹಬೂಬ್ ಖಾನ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**PR. 2159**

## ಸಹಕಾರ ಸಚಿವಾಲಯ

**ಸಂಖ್ಯೆ: ಸಿಒ 69 ಸಿಎಲ್‌ಎಸ್ 2010, ಬೆಂಗಳೂರು, ದಿನಾಂಕ:18.12.2012.**

### ತಿದ್ದುಪಡಿ ಆದೇಶ

**ವಿಷಯ:** ಬಡ್ಡಿ ರಿಯಾಯಿತಿ ಯೋಜನೆಯನ್ನು ವೆನಿಲಾ ಬೆಳೆಯ ಕೃಷಿ ಪರಿವರ್ತಿತ ಸಾಲಗಳಿಗೂ ವಿಸ್ತರಿಸುವ ಬಗ್ಗೆ.

ಬಡ್ಡಿ ರಿಯಾಯಿತಿ ಯೋಜನೆಯನ್ನು ವೆನಿಲಾ ಬೆಳೆಯ ಕೃಷಿ ಪರಿವರ್ತಿತ ಸಾಲಗಳಿಗೂ ವಿಸ್ತರಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ: ಸಿಒ 69 ಸಿಎಲ್‌ಎಸ್ 2010, ದಿನಾಂಕ: 30.06.2012ರ ಪ್ರಸ್ತಾವನೆಯ ಎರಡನೇ ಪ್ಯಾರಾದಲ್ಲಿ 2007–08ನೇ ಸಾಲಿನಿಂದ ರೂ.3653.85 ಲಕ್ಷಗಳಷ್ಟು ವೆನಿಲಾ ಕೃಷಿ ಸಲುವಾಗಿ ಮಾಧ್ಯಮಿಕ ಸಾಲಗಳನ್ನು ನೀಡಿರುತ್ತದೆ ಎಂಬುದರ ಬದಲಾಗಿ **"ಉತ್ತರ ಕನ್ನಡ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಿಯಮಿತ, ಶಿರಸಿ** ಇದು 2007–08ನೇ ಸಾಲಿನವರೆಗೆ ರೂ.3653.85 ಲಕ್ಷಗಳಷ್ಟು ವೆನಿಲಾ ಕೃಷಿ ಸಲುವಾಗಿ ಮಾಧ್ಯಮಿಕ ಸಾಲಗಳನ್ನು ನೀಡಿರುತ್ತದೆ**"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 10**

## ಸಹಕಾರ ಸಚಿವಾಲಯ

**ವಿಷಯ:** ವಿಫಲಬಾವಿ ಪರಿಹಾರ ಯೋಜನೆಯಡಿ ಅಂತಿಮ ಪರಿಹಾರಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 275 ಸಿಎಲ್‌ಎಸ್ 2010, ದಿನಾಂಕ: 08.11.2011.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ಎಲ್‌ಡಿಬಿ/ವಿಬಾ/4/2012–13, ದಿನಾಂಕ: 14.05.2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ವಿಫಲಬಾವಿ ಪರಿಹಾರ ಧನ ಯೋಜನೆಯಡಿ ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿ ಬಾಕಿ ಇರುವ ಪ್ರಕರಣಗಳಿಗೆ ಸಂಬಂಧಿಸಿದಂತೆ ಅಸಲು ಪರಿಹಾರಧನ ಮತ್ತು ಶೇಕಡಾ 50ರ ಬಡ್ಡಿ ಬಾಬ್ತು 2011–12ನೇ ಸಾಲಿನ ಆಯವ್ಯಯದಲ್ಲಿ ವಿಫಲಬಾವಿ ಪರಿಹಾರಧನ ಯೋಜನೆಗೆ ಹಂಚಿಕೆ ಮಾಡಿರುವ ರೂ.1.00ಕೋಟಿಯನ್ನು ಬಿಡುಗಡೆ ಮಾಡಲಾಗಿದೆ.

ವಿಫಲಬಾವಿ ಪರಿಹಾರ ಯೋಜನೆಯಡಿ ಹಣ ಬಿಡುಗಡೆಗೆ ಪ್ರಸ್ತಾವ ಸಲ್ಲಿಸಲು ದಿನಾಂಕ: 31.12.2011ರವರೆಗೆ ಅಂತಿಮ ಗಡುವು ನಿಗದಿಪಡಿಸಲಾಗಿತ್ತು. ಅದರಂತೆ, ದಿನಾಂಕ: 31.12.2011ರವರೆಗೆ ಜಿಲ್ಲಾಧಿಕಾರಿಗಳಿಂದ ಮಂಜೂರಾತಿಗಾಗಿ ಆದೇಶವಾಗಿರುವ ಅರ್ಜಿಗಳ ಪ್ರಸ್ತಾವೆಗಳ ವಿಫಲಬಾವಿ ಅಸಲು ಪರಿಹಾರಧನ 4267 ಪ್ರಕರಣಗಳಿಗೆ ರೂ.5,87,78,474.00 ಮತ್ತು ಶೇಕಡಾ 50ರ ಬಡ್ಡಿ ಬಾಬ್ತು 10948 ಪ್ರಕರಣಗಳಿಗೆ ರೂ.7,09,65,776.00ಗಳು ಹೀಗೆ ಒಟ್ಟು ರೂ.12,97,44,250.00ಗಳು ಅಗತ್ಯವಿದ್ದು 2012–13ನೇ ಸಾಲಿಗೆ ಆಯವ್ಯಯದಲ್ಲಿ ಯೋಜನೇತರದಲ್ಲಿ ರೂ.1297.44ಲಕ್ಷ ಅನುದಾನ ಹಂಚಿಕೆ ಮಾಡಿ ಬಿಡುಗಡೆ ಮಾಡಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 162 ಸಿಎಲ್‌ಎಸ್ 2012 ಬೆಂಗಳೂರು, ದಿನಾಂಕ:23.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಫಲಬಾವಿ ಪರಿಹಾರಧನ ಯೋಜನೆಯಡಿ ದಿನಾಂಕ: 31.12.2011ರವರೆಗೆ ಸ್ವೀಕೃತವಾದ ಪ್ರಕರಣಗಳಿಗೆ ಸಂಬಂಧಿಸಿದಂತೆ ಅಂತಿಮ ಪರಿಹಾರ ಹಣ ರೂ.1297.00ಲಕ್ಷಗಳನ್ನು ಲೆಕ್ಕಶೀರ್ಷಿಕೆ 2425–00–107–3–01–101(ಯೋಜನೆ) ಇದರಡಿ ಪ್ರಸಕ್ತ ಸಾಲಿನ ಪೂರಕ ಅಂದಾಜುಗಳ ಮೊದಲ ಕಂತಿನಲ್ಲಿ ಒದಗಿಸಿ ಬಿಡುಗಡೆ ಮಾಡಲಾಗಿದೆ.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಕೇಂದ್ರ ಕಚೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: **ಆಇ 177 ವೆಚ್ಚ–2/2012, ದಿನಾಂಕ: 07.07.2012**ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 2243**

## ಸಹಕಾರ ಸಚಿವಾಲಯ

**ಸಂಖ್ಯೆ: ಸಿಒ 162 ಸಿಎಲ್‌ಎಸ್ 2012, ಬೆಂಗಳೂರು, ದಿನಾಂಕ:22.08.2012.**

### ತಿದ್ದುಪಡಿ ಆದೇಶ

**ವಿಷಯ:** ವಿಫಲಬಾವಿ ಪರಿಹಾರ ಯೋಜನೆಯಡಿ ಅಂತಿಮ ಪರಿಹಾರಧನ ಬಿಡುಗಡೆ ಬಗ್ಗೆ.

ವಿಫಲಬಾವಿ ಪರಿಹಾರ ಯೋಜನೆಯಡಿ ಸರ್ಕಾರದ ಆದೇಶ ಸಂಖ್ಯೆ: ಸಿಒ 162 ಸಿಎಲ್‌ಎಸ್ 2012 ದಿನಾಂಕ:23.07.2012ರ ಆದೇಶ ಭಾಗದಲ್ಲಿ ಲೆಕ್ಕಶೀರ್ಷಿಕೆ 2425–00–107–3–01–101(ಯೋಜನೆ) ಅನ್ನು 2425–00–107–3–01–103 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 2244**

## ಸಹಕಾರ ಸಚಿವಾಲಯ

**ವಿಷಯ:** ಭಾರತ ಸರ್ಕಾರದ ಪುನಶ್ಚೇತನ ಪ್ಯಾಕೇಜಿನಡಿ ರಾಜ್ಯ ಸರ್ಕಾರದಿಂದ ಬಿಡುಗಡೆಯಾಗಬೇಕಿರುವ ಬದ್ಧತೆಯುಳ್ಳ ಕ್ಲೈಂ (Committed Liabilities) ಮೊತ್ತ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 333 ಸಿಎಲ್‌ಎಸ್ 2011 (ಭಾ), ದಿನಾಂಕ:30.03.2012.

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ವೈಸ/16/2011–12, ದಿನಾಂಕ: 01.08.2012.

**ಪ್ರಸ್ತಾವನೆ :**

ಭಾರತ ಸರ್ಕಾರದ ಪುನಶ್ಚೇತನ ಪ್ಯಾಕೇಜಿನಡಿ ರಾಜ್ಯ ಸರ್ಕಾರದಿಂದ ಬಿಡುಗಡೆಯಾಗಬೇಕಿರುವ ಬದ್ಧತೆಯುಳ್ಳ ಜವಾಬ್ದಾರಿಗಳನ್ನು ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಮಂಡ್ಯ ಜಿಲ್ಲೆ, ಪಾಂಡವಪುರ, ಇದಕ್ಕೆ ಲೆಕ್ಕಶೀರ್ಷಿಕೆ 6852–02–800–0–01–394(ಯೋಜನೆ) ಇದರಡಿ ಲಭ್ಯವಿರುವ ಉಳಿತಾಯದ ಅನುದಾನದ ಮೊತ್ತದಿಂದ ರೂ.1,500.00ಲಕ್ಷಗಳನ್ನು ಮರು ಹೊಂದಾಣಿಕೆ ಮೂಲಕ ಭರಿಸಲು ಮಂಜೂರಾತಿಯನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೀಡಲಾಗಿದೆ.

ಬದ್ಧತೆಯುಳ್ಳ ಜವಾಬ್ದಾರಿಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳು ಹಾಗೂ ಅಪೆಕ್ಸ್ ಬ್ಯಾಂಕ್ ಏಕಕಾಲಿಕ ಸಾಲ ತೀರುವಳಿ ಯೋಜನೆಯಡಿ(ಒಟಿಎಸ್) ಸಂಬಂಧಿಸಿದ ಸಾಲ ಹಾಗೂ ಶೇಕಡಾ 6.50ರ ದರದಲ್ಲಿ ಬಡ್ಡಿ ಪಡೆಯಲು ತೀರ್ಮಾನಿಸಿವೆ. ಅದರಂತೆ, ಓದಲಾದ(2)ರ ಪ್ರಸ್ತಾವದಲ್ಲಿ ಸಹಕಾರ ಸಂಘಗಳ ನಿಬಂಧಕರು ನಾಲ್ಕು ಸಹಕಾರ ಸಕ್ಕರೆ ಕಾರ್ಖಾನೆಗಳಿಗೆ ಸಂಬಂಧಿಸಿದಂತೆ 08 ಬ್ಯಾಂಕುಗಳ ರೂ.4,355.50ಲಕ್ಷಗಳ ಬದ್ಧತೆಯುಳ್ಳ ಜವಾಬ್ದಾರಿಗಳನ್ನು ಕೆಳಕಂಡ ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಸಕ್ಕರೆ ಕಾರ್ಖಾನೆಯ ಹೆಸರು | ಬ್ಯಾಂಕಿನ ಹೆಸರು | ಅಸಲು | ಬಡ್ಡಿ | ಒಟ್ಟು ಮೊತ್ತ |
|---|---|---|---|---|---|
| 1 | 2 | 3 | 4 | 5 | 6 |
| 01. | ಭಾಗ್ಯಲಕ್ಷ್ಮೀ ಸಹಕಾರಿ ಸಕ್ಕರೆ ಕಾರ್ಖಾನೆ ನಿ. | ಅಪೆಕ್ಸ್ ಬ್ಯಾಂಕು | 432.83 | 492.48 | 925.31 |
| 02. | ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿ. | ಡಿಸಿಸಿಬಿ, ತುಮಕೂರು | 129.71 | 84.41 | 214.12 |
| | | ಡಿಸಿಸಿಬಿ, ದಾವಣಗೆರೆ | 341.25 | 223.59 | 564.84 |
| | | ಡಿಸಿಸಿಬಿ, ಚಿತ್ರದುರ್ಗ | 445.77 | 214.68 | 660.45 |
| | ಮೊತ್ತ | | 916.73 | 522.68 | 1439.41 |
| 03. | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿ. | ಡಿಸಿಸಿಬಿ, ತುಮಕೂರು | 300.00 | 181.33 | 481.33 |
| | | ಕೆಸಿಸಿಬಿ, ಧಾರವಾಡ | 44.74 | 29.67 | 74.41 |
| | ಮೊತ್ತ | | 344.74 | 211.00 | 555.74 |
| 04. | ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿ. | ಡಿಸಿಸಿಬಿ, ಮೈಸೂರು | 397.99 | 207.08 | 605.07 |
| | | ಡಿಸಿಸಿಬಿ, ಶಿವಮೊಗ್ಗ | 321.82 | 50.35 | 372.17 |
| | | ಡಿಸಿಸಿಬಿ, ದಕ್ಷಿಣ ಕನ್ನಡ | 337.74 | 120.02 | 457.76 |
| | ಮೊತ್ತ | | 1057.55 | 377.45 | 1435.00 |
| | ಒಟ್ಟು ಮೊತ್ತ | | 2751.90 | 1603.60 | 4355.50 |

ಅದರಂತೆ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 333 ಸಿಎಲ್ಎಸ್ 2012, ಬೆಂಗಳೂರು, ದಿನಾಂಕ:17.11.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಹಕಾರ ಹಣಕಾಸು ಸಂಸ್ಥೆಗಳಿಂದ (ಸಹಕಾರಿ ಬ್ಯಾಂಕುಗಳಿಂದ) ಸರ್ಕಾರದ ಖಾತರಿ ಮೇಲೆ ಸಹಕಾರ ಸಕ್ಕರೆ ಕಾರ್ಖಾನೆಗಳು ಪಡೆದ ಸಾಲಗಳನ್ನು ಸಂಬಂಧಿಸಿದ ಹಣಕಾಸು ಸಂಸ್ಥೆಗಳಿಗೆ (ಸಹಕಾರಿ ಬ್ಯಾಂಕುಗಳಿಗೆ) ಮರುಪಾವತಿಸಲು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಒಟ್ಟು ರೂ.4355.50ಲಕ್ಷಗಳನ್ನು ಲೆಕ್ಕಶೀರ್ಷಿಕೆ 6425–00–108–3–58 ಸಹಕಾರ ಸಂಸ್ಥೆಗಳ ಪುನಶ್ಚೇತನ–394 ಸಾಲಗಳು ಇದರಡಿ ಬಿಡುಗಡೆ ಮಾಡಲಾಗಿದೆ.

**ಷರತ್ತುಗಳು :**

1. ಈ ಹಣವನ್ನು ನೇರವಾಗಿ ಸಂಬಂಧಿಸಿದ ಸಹಕಾರಿ ಹಣಕಾಸು ಸಂಸ್ಥೆಗಳಿಗೆ (ಬ್ಯಾಂಕುಗಳಿಗೆ) ಸಹಕಾರ ಸಕ್ಕರೆ ಕಾರ್ಖಾನೆಗಳು ಪಡೆದ ಸಾಲಗಳಿಗೆ ಜಮಾ ಮಾಡತಕ್ಕದ್ದು.
2. ಮೇಲಿನ ಒಟ್ಟು ಮೊತ್ತವನ್ನು ಸಂಬಂಧಿಸಿದ ಸಹಕಾರ ಸಕ್ಕರೆ ಕಾರ್ಖಾನೆಗಳಿಗೆ ಪ್ರಸ್ತಾವನೆಯಲ್ಲಿ ನಮೂದಿಸಿರುವಂತೆ ರಾಜ್ಯ ಸರ್ಕಾರದಿಂದ ಸಾಲವಾಗಿ ಮಂಜೂರು ಮಾಡಲಾಗಿದೆ. ಈ ಸಾಲಕ್ಕೆ ಆರ್ಥಿಕ ಇಲಾಖೆ ನಿಗದಿಪಡಿಸುವ ಬಡ್ಡಿ ದರ ಮತ್ತು ಷರತ್ತುಗಳು ಅನ್ವಯಿಸುತ್ತವೆ.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು(ಪತ್ತು), ಸಹಕಾರ ಸಂಘಗಳ ನಿಬಂಧಕರ ಕಚೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸಿ, ನಂತರ ಅಪೆಕ್ಸ್ ಬ್ಯಾಂಕಿನಲ್ಲಿರುವ ಸಂಬಂಧಿಸಿದ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಚಾಲ್ತಿ ಖಾತೆಗೆ ವರ್ಗಾಯಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 235 ಇಎಕ್ಸ್‌ಪಿ–2/2012, ದಿನಾಂಕ: 07.11.2012ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

PR. 2245

## ಸಹಕಾರ ಸಚಿವಾಲಯ

**ವಿಷಯ:** 2012–13ನೇ ಸಾಲಿಗೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಸಹಕಾರ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯಲ್ಲಿ ಬಡ್ಡಿ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಇ 224 ಸಿಎಲ್ಎಸ್ 2010, ದಿನಾಂಕ:20.06.2012 ಮತ್ತು 21.08.2012.

2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 8 ಟಿಎಫ್‌ಪಿ 2012, ದಿನಾಂಕ:04.10.2012.

3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/4/ಕೆ.ಆರ್.ಎಫ್/2008–09, ದಿನಾಂಕ: 18.10.2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಹಕಾರ ಕೃಷಿ ಪತ್ತಿನ ಸಂಘಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಸಹಕಾರ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲವನ್ನು ಒದಗಿಸಿದ ಬಾಬ್ತು ಬಡ್ಡಿ ಸಹಾಯಧನ 2012–13ನೇ ಸಾಲಿನ ವಾರ್ಷಿಕ ಆಯವ್ಯಯ ರೂ.2000.00ಲಕ್ಷಗಳ ಪೈಕಿ ಮೊದಲನೇ ಕಂತಿನ ಮೊತ್ತ ರೂ.500.00ಲಕ್ಷಗಳನ್ನು ದಿನಾಂಕ:20.06.2012ರಲ್ಲಿ ಮತ್ತು ಎರಡನೇ ಕಂತಿನ ಮೊತ್ತ ರೂ.500.00ಲಕ್ಷಗಳನ್ನು ದಿನಾಂಕ:21.08.2012ರಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ(3)ರಲ್ಲಿ ಸಹಕಾರ ಸಂಘಗಳ ನಿಬಂಧಕರು ಬಿಡುಗಡೆಗೆ ಬಾಕಿ ಇರುವ ರೂ.689.21ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಆರ್ಥಿಕ ಇಲಾಖೆಯ ದಿನಾಂಕ:27.04.2012ರ ಆದೇಶದಲ್ಲಿ ಕಾರ್ಯಕ್ರಮದ ವಾರ್ಷಿಕ ಆಯವ್ಯಯದ ಶೇಕಡಾ 25ರಷ್ಟನ್ನು ಮೊದಲನೇ ತ್ರೈಮಾಸಿಕದಲ್ಲಿ ಮತ್ತು ಶೇಕಡಾ 25 ಅನ್ನು ಎರಡನೇ ತ್ರೈಮಾಸಿಕದಲ್ಲಿ ಮತ್ತು ಮೇಲೆ ಓದಲಾದ (2)ರ ಆದೇಶದಲ್ಲಿ ಮೂರನೇ ತ್ರೈಮಾಸಿಕದಲ್ಲಿ ಶೇಕಡಾ 25ರಷ್ಟನ್ನು ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಅನುಮೋದಿಸಿ ಬಿಡುಗಡೆ ಮಾಡಲು ಅವಕಾಶವಿರುತ್ತದೆ. ಈಗಾಗಲೇ ಮೊದಲನೇ ತ್ರೈಮಾಸಿಕದಲ್ಲಿ ರೂ.500.00ಲಕ್ಷಗಳನ್ನು ಮತ್ತು ಎರಡನೇ ತ್ರೈಮಾಸಿಕದಲ್ಲಿ ರೂ.500.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಮೂರನೇ ತ್ರೈಮಾಸಿಕದಲ್ಲಿ ರೂ.500.00ಲಕ್ಷಗಳನ್ನು ಬಿಡುಗಡೆ ಮಾಡಲು ಅವಕಾಶವಿರುತ್ತದೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 224 ಸಿಎಲ್ಎಸ್ 2012, ಬೆಂಗಳೂರು, ದಿನಾಂಕ:20.11.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಹಕಾರ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಿದ ಬಾಬ್ತು ಬಡ್ಡಿ ಸಹಾಯಧನ 2012–13ನೇ ಸಾಲಿನ ವಾರ್ಷಿಕ ಆಯವ್ಯಯ ರೂ.2000.00ಲಕ್ಷಗಳ ಪೈಕಿ ಮೂರನೇ ಕಂತಿನ ಮೊತ್ತ ರೂ.500.00ಲಕ್ಷಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "2425–00–107–2–45–106" ಸ್ವಸಹಾಯ ಸಂಘಗಳ ಸಾಲದ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿ ಕೆಳಕಂಡಂತೆ ಭರಿಸತಕ್ಕದ್ದು.

(ರೂ. ಲಕ್ಷಗಳಲ್ಲಿ)

| | |
|---|---|
| **2425–00–107–2–45–ಸ್ವಸಹಾಯ ವರ್ಗಗಳಿಗೆ ಸಾಲಗಳ ಮೇಲಣ ಬಡ್ಡಿ ಧನಸಹಾಯ–106–ಸಹಾಯಧನ (ಯೋಜನೆ)** | **351.92** |
| **2425–00–107–2–45–ಸ್ವಸಹಾಯ ವರ್ಗಗಳಿಗೆ ಸಾಲಗಳ ಮೇಲಣ ಬಡ್ಡಿ ಧನಸಹಾಯ–422–ವಿಶೇಷ ಘಟಕ ಯೋಜನೆ (ಯೋಜನೆ)** | **91.47** |
| **2425–00–107–2–45–ಸ್ವಸಹಾಯ ವರ್ಗಗಳಿಗೆ ಸಾಲಗಳ ಮೇಲಣ ಬಡ್ಡಿ ಧನಸಹಾಯ–423–ಗಿರಿಜನ ಉಪಯೋಜನೆ(ಯೋಜನೆ)** | **56.61** |
| **ಒಟ್ಟು** | **500.00** |

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಚೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ: 27.04.2012 ಮತ್ತು 04.10.2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 2241**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** 2006–07 ಮತ್ತು 2007–08 ನೇ ಸಾಲಿಗೆ ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:** 1) ದಿನಾಂಕ 12–04–2007 ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.

2) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) ದಿನಾಂಕ: 13–06–07

3) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2)ದಿನಾಂಕ: 12–09–07

4) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (2) ದಿನಾಂಕ: 19–10–07

5) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (3) ದಿನಾಂಕ: 02–11–07

6) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2)(4)) ದಿನಾಂಕ: 01–01–08

7) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) ದಿನಾಂಕ: 22–02–08

8) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) ದಿನಾಂಕ: 20–03–08

9) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (8) ದಿನಾಂಕ: 25–03–08

10) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2)(9) ದಿನಾಂಕ: 21–05–08

11) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (10) ದಿನಾಂಕ: 30–06–08

12) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2)(11) ದಿನಾಂಕ: 24–11–08

13) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2)(12) ದಿನಾಂಕ: 02–07–09

14) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (13) ದಿನಾಂಕ: 11–08–09

15) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (14) ದಿನಾಂಕ: 25–11–09

16) ಸರ್ಕಾರದ ಆದೇಶ ಸಂಖ್ಯೆ: ಸಿಐ 298 ಎಸ್‌ಜಿಎಫ್ 08 ದಿನಾಂಕ: 05–01–10

17) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಸಿಐ 298 ಎಸ್‌ಜಿಎಫ್ 08 ದಿನಾಂಕ: 23–03–10

18) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) ದಿನಾಂಕ: 23–03–10

19) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07(ಭಾ–2) (15) ದಿನಾಂಕ: 13–05–11

20) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(ಭಾ–2) ದಿನಾಂಕ: 12–03–08

21) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(ಭಾ–2) ದಿನಾಂಕ: 13–06–08

22) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(ಭಾ–2)(2)) ದಿನಾಂಕ: 28–08–08

23) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(ಭಾ–2)(3)) ದಿನಾಂಕ: 16–12–08

24) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(4) ದಿನಾಂಕ: 02–01–09

24) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(5) ದಿನಾಂಕ: 19–01–09

26) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(6) ದಿನಾಂಕ: 07–07–09

27) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(7) ದಿನಾಂಕ: 07–12–09

28) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(8) ದಿನಾಂಕ: 21–12–10

29) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(9) ದಿನಾಂಕ: 25–03–11

30) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(10) ದಿನಾಂಕ: 28–02–12

31) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(10) ದಿನಾಂಕ: 28–03–12

32) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/04/12–13, ದಿನಾಂಕ: 11–08–11

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2) ರಿಂದ (6) ರಲ್ಲಿರುವ ದಿನಾಂಕ 13–06–07, 12–09–07, 19–10–07, 02–11–07 ಮತ್ತು 01–01–08ರ ಸರ್ಕಾರದ ಆದೇಶಗಳಲ್ಲಿ 2006–07ನೇ ಸಾಲಿನ ಸಕ್ಕರೆ ವರ್ಷಕ್ಕೆ ಸಂಬಂಧಿಸಿದಂತೆ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ. 3,62,18,916/– ರೈತರಿಗೆ ಪರಿಹಾರ ಧನ ರೂ. 25,00,00,000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ, ರೂ.21,13,92,000/–ಗಳು ಸೇರಿ ಒಟ್ಟು ರೂ.49,76,10,916/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) (8) (9) ರಲ್ಲಿರುವ ದಿನಾಂಕ 22–02–08, 20–03–08, ಮತ್ತು 25–03–08ರ ಸರ್ಕಾರದ ಆದೇಶಗಳಲ್ಲಿ ಕಬ್ಬು ಬೆಳೆದ ರೈತರಿಗೆ ಪರಿಹಾರ ನೀಡಲು ಕ್ರಮವಾಗಿ ರೂ. 7.00 ಕೋಟಿಗಳು, ರೂ. 6.64 ಕೋಟಿಗಳು ಮತ್ತು ರೂ.1,25,11,000/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (10)ರಲ್ಲಿರುವ ದಿನಾಂಕ 21–05–2008ರ ಆದೇಶದಲ್ಲಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನಂತರ ಅಂದರೆ 16–04–2007ರಿಂದ 31–05–07ರ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ ಕಬ್ಬಿಗೆ ರೂ. 100/– ರಂತೆ ರೂ. 10,00,00,000/–ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (11)ರಲ್ಲಿರುವ ದಿನಾಂಕ 30–06–2008ರ ಆದೇಶದಲ್ಲಿ ಬಿಜಾಪುರ, ಮೈಸೂರು ಮತ್ತು ಬೆಳಗಾಂ ಜಿಲ್ಲೆಗಳ ರೈತರಿಗೆ ಪರಿಹಾರಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ.3.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (12) ರಲ್ಲಿರುವ ದಿನಾಂಕ 24–11–2008ರ ಆದೇಶದಲ್ಲಿ ರೈತರಿಗೆ ಪರಿಹಾರ ಧನ ಮತ್ತು ಸಾಗಾಣಿಕೆ ಸಹಾಯಧನ ನೀಡಲು ರೂ. 3,03,73,203/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (13) ರಲ್ಲಿರುವ ದಿನಾಂಕ 02–07–09ರ ಆದೇಶದಲ್ಲಿ ಬಿಜಾಪುರ, ಗುಲ್ಬರ್ಗಾ, ಬೆಳಗಾಂ ಜಿಲ್ಲೆಗಳಿಂದ ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜು ಮಾಡಿದ ಪ್ರತಿ ಟನ್ ಕಬ್ಬಿಗೆ ರೂ. 2/–ರಂತೆ ಸಾಗಾಣಿಕೆ ಸಹಾಯಧನ ರೂ. 1,81,07,599/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (14) ರಲ್ಲಿರುವ ದಿನಾಂಕ 11–08–2009ರ ಆದೇಶದಲ್ಲಿ ಬಿಜಾಪುರ ಜಿಲ್ಲೆ, ಇಂಡಿ ಮತ್ತು ಸಿಂಧಗಿ ತಾಲ್ಲೂಕಿನ ಕಬ್ಬು ಬೆಳೆದು ಕಟಾವಾಗದೆ ಜಮೀನಿನಲ್ಲಿಯೇ ಉಳಿದು ನಷ್ಟವಾದ ಕಬ್ಬಿಗೆ ಪ್ರತಿ ಹೆಕ್ಟೇರಿಗೆ ರೂ. 25,000/–ಗಳಂತೆ ರೈತರಿಗೆ ಪಾವತಿಸುವ ಸಲುವಾಗಿ ರೂ.15.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (15)ರಲ್ಲಿರುವ ದಿನಾಂಕ 25–11–2009ರ ಆದೇಶದಲ್ಲಿ ಬೆಳಗಾವಿ,ಬಿಜಾಪುರ, ಬಾಗಲಕೋಟೆ, ಧಾರವಾಡ, ಗುಲ್ಬರ್ಗಾ, ಜಿಲ್ಲೆಗಳ ರೈತರಿಗೆ ಹಾಗೂ ಮೈಸೂರು ಜಿಲ್ಲೆಯ ಬನ್ನಾರಿ ಅಮ್ಮನ್ ಶುಗರ್ಸ್ ಈ ಕಾರ್ಖಾನೆಗೆ ಸಾಗಾಣಿಕೆ ಸಹಾಯಧನವನ್ನು ಪಾವತಿಸುವ ಸಲುವಾಗಿ ಒಟ್ಟು ರೂ.97,83,455/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (19) ರಲ್ಲಿರುವ ಸರ್ಕಾರದ ಆದೇಶ ದಿನಾಂಕ: 13–05–2011 ರ ಆದೇಶದಲ್ಲಿ 06–07ನೇ ಸಾಲಿನ ಸಕ್ಕರೆ ವರ್ಷದಲ್ಲಿ 12 ತಿಂಗಳು ಪೂರೈಸಿ ಪಕ್ವವಾದ ಕಟಾವಾಗದೆ ಜಮೀನಿನಲ್ಲಿ ಉಳಿದು ನಷ್ಟವಾದ ಕಬ್ಬಿಗೆ, ಕಬ್ಬು ಆಯುಕ್ತರು ಶಿಫಾರಸ್ಸು ಮಾಡಿರುವ ಮೊತ್ತದಲ್ಲಿ ಶೇ.50 ರಷ್ಟು ಪರಿಹಾರಧನ ರೂ.4,50,53,932/–ಗಳನ್ನು ಬಾಗಲಕೋಟೆ, ಧಾರವಾಡ, ಬೆಳಗಾವಿ, ಹಾಸನ, ಮತ್ತು ಚಾಮರಾಜನಗರ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (20) ರಲ್ಲಿರುವ ದಿನಾಂಕ 12–03–2008ರ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 07–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ: 31–03–2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (21) ರಲ್ಲಿರುವ ದಿನಾಂಕ 13–06–2008ರ ಆದೇಶದಲ್ಲಿ ರೂ. 2.00 ಕೋಟಿಗಳನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (22) ರಲ್ಲಿರುವ ದಿನಾಂಕ 28–08–2008ರ ಆದೇಶದಲ್ಲಿ ರೂ.100.59 ಲಕ್ಷಗಳನ್ನು ಮೈಸೂರು ಪೇಪರ್ ಮಿಲ್ಸ್ ಲಿ., ರವರಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (23) ರಲ್ಲಿರುವ ದಿನಾಂಕ 16–12–2008ರ ಆದೇಶದಲ್ಲಿ ರೂ.6,64,76,652/–ಗಳನ್ನು ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ ಮತ್ತು ದೂದ್ ಗಂಗಾ ಸಹಕಾರಿ ಸಕ್ಕರೆ ಕಾರ್ಖಾನೆ., ಈ ಎರಡು ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (24)ರಲ್ಲಿರುವ ದಿನಾಂಕ 02–01–2009ರ ಆದೇಶದಲ್ಲಿ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 100/–ಗಳ ಸಹಾಯಧನ ಬಾಬ್ತು ಶೇ.50 ರಷ್ಟು ರೂ.11,15,00,000/–ಗಳನ್ನು ಹಾಗೂ ಸಾಗಾಣಿಕೆ ಸಹಾಯಧನ ರೂ.7,25,00,000/–ಗಳನ್ನು, ಒಟ್ಟು ಸೇರಿ ರೂ. 18,40,00,000/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (25) ರಲ್ಲಿರುವ ದಿನಾಂಕ 19–01–2009ರ ಆದೇಶದಲ್ಲಿ ರೂ.100/– ಸಹಾಯಧನ ಬಾಬ್ತು ರೂ.4,90,05,135/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (26) ರಲ್ಲಿರುವ ದಿನಾಂಕ 07–07–2009ರ ಆದೇಶದಲ್ಲಿ ಸಾಗಾಣಿಕೆ ಸಹಾಯಧನ ರೂ.3,69,77,708/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (27)ರಲ್ಲಿರುವ ದಿನಾಂಕ 07–12–2009ರ ಆದೇಶದಲ್ಲಿ ಸಾಗಾಣಿಕೆ ಸಹಾಯಧನ ರೂ. 3,87,56,200/–ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (28)ರಲ್ಲಿರುವ ದಿನಾಂಕ 21–12–2010 ಆದೇಶದಲ್ಲಿ 6 ಸಕ್ಕರೆ ಕಾರ್ಖಾನೆಗಳಿಗೆ ರೂ.1,36,52,873/–ಗಳ ಸಾಗಾಣಿಕೆ ಸಹಾಯಧನ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (29)ರಲ್ಲಿರುವ ದಿನಾಂಕ 25–03–2011ರ ಆದೇಶದಲ್ಲಿ ರಾಜ್ಯದ 15 ಸಕ್ಕರೆ ಕಾರ್ಖಾನೆಗಳಿಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 16,69,28,964/–ಗಳ ಸಹಾಯಧನವನ್ನು ಬಿಡುಗಡೆ ಮಾಡಲಾಗಿದ್ದು, ಈ 15 ಕಾರ್ಖಾನೆಗಳಲ್ಲಿ 10 ಕಾರ್ಖಾನೆಗಳು ರಾಜ್ಯ ಸರ್ಕಾರಕ್ಕೆ ಕಬ್ಬು ಖರೀದಿ ತೆರಿಗೆ ಮತ್ತು ಇತರೆ ಬಾಕಿಗಳನ್ನು ಉಳಿಸಿಕೊಂಡಿದ್ದು, ಈ 10 ಕಾರ್ಖಾನೆಗಳಿಗೆ ಸಂಬಂಧಿಸಿದಂತೆ ರೂ. 7,43,06,756/–ಗಳನ್ನು ಸರ್ಕಾರದ ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ರೂ. 9,26,22,208/–ಗಳನ್ನು 6 ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ(30)ರಲ್ಲಿರುವ ದಿನಾಂಕ: 28–02–2012ರ ಆದೇಶದಲ್ಲಿ 06–07 ಮತ್ತು 07–08ನೇ ಸಾಲಿನ ಸಕ್ಕರೆ ವರ್ಷದಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಾರ್ಖಾನೆಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ ರೂ. 100/–ರಂತೆ ರೂ.1153.21 ಲಕ್ಷಗಳ (ಒಂದು ಸಾವಿರದ ನೂರ ಐವತ್ಮೂರು ಲಕ್ಷ ಇಪ್ಪತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಸಹಾಯಧನವನ್ನು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ (31) ರಲ್ಲಿರುವ ದಿನಾಂಕ: 28–03–2012ರ ಆದೇಶದಲ್ಲಿ ಮರು ಹೊಂದಾಣಿಕೆ ಮೂಲಕ ಆರ್ಥಿಕ ಇಲಾಖೆ ಒದಗಿಸಿದ ಹೆಚ್ಚುವರಿ ಅನುದಾನ ರೂ.75.00 ಲಕ್ಷಗಳನ್ನು 07–08ನೇ ಸಾಲಿನ ಸಕ್ಕರೆ ವರ್ಷದಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಾರ್ಖಾನೆಗಳಲ್ಲಿ ನುರಿಸಿದ ಪ್ರತಿ ಮೆಟ್ರಿಕ್ ಟನ್ ಕಬ್ಬಿಗೆ ರೂ.100ರಂತೆ ಸಹಾಯ ಧನವನ್ನು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆದ್ಯತೆಯ ಮೇರೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ (32)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ದಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ 12–06–12ರ ಪತ್ರದಲ್ಲಿ 06–07ನೇ ಸಾಲಿಗೆ ಸಂಬಂಧಿಸಿದಂತೆ ಕಬ್ಬು ಬೆಳೆದ ರೈತರಿಗೆ ಬಿಡುಗಡೆಗೆ ಬಾಕಿಯಿರುವ ರೂ. 2688.00 ಲಕ್ಷಗಳು, 07–08ನೇ ಸಾಲಿಗೆ ಸಕ್ಕರೆ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.100 ರಂತೆ ಬಿಡುಗಡೆಗೆ ಬಾಕಿಯಿರುವ ರೂ. 821.52 ಲಕ್ಷಗಳು ಮತ್ತು ಕಾರ್ಖಾನೆಗಳು ರಫ್ತು ಮಾಡಿದ ಪ್ರತಿ ಕ್ವಿಂಟಾಲ್ ಸಕ್ಕರೆಗೆ ರೂ.100/–ರಂತೆ ಸಹಾಯಧನ ರೂ. 3932.12 ಲಕ್ಷಗಳು ಅಂದರೆ ಒಟ್ಟು ರೂ. 6760.52 ಲಕ್ಷಗಳಲ್ಲಿ 12–13ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನ ರೂ. 870.00 ಲಕ್ಷಗಳನ್ನು ಹೊರತುಪಡಿಸಿ ಇನ್ನೂ ಹೆಚ್ಚುವರಿಯಾಗಿ ರೂ.5910.52 ಲಕ್ಷಗಳನ್ನು (ಒಟ್ಟು ರೂ. 6760.52) ಒದಗಿಸುವಂತೆ ಕೋರಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 82 ಎಸ್‌ಜಿಎಫ್ 2012, ಬೆಂಗಳೂರು ದಿನಾಂಕ: 03–08–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 06–07 ಮತ್ತು 07–08ನೇ ಸಾಲಿಗೆ ಸಂಬಂಧಿಸಿದಂತೆ ಬಿಡುಗಡೆಗೆ ಬಾಕಿ ಇರುವ ಮೊತ್ತವನ್ನು ಪಾವತಿಸುವ ಸಲುವಾಗಿ ರೂ.212.50 ಲಕ್ಷಗಳ (ಇನ್ನೂರ ಹನ್ನೆರಡು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಸಹಾಯಧನವನ್ನು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 12–13ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2852–08–201–0–07 Special package to Sugarcane Growers & Sugar Industries (Plan)-106 Subsidies ಇದರ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ: 13–06–2007 ಮತ್ತು 12–03–2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಹಾಗೂ ಈ ಕುರಿತಾದ ಕ್ಲೇಮುಗಳು ನಿವ್ವಳ ಆಧಾರಿತವಾಗಿದ್ದು (net basis) ಈ ಹಿಂದೆ ಕ್ಲೇಮು ಮಾಡಿಲ್ಲ ಎಂಬುದನ್ನು ಪರಿಶೀಲಿಸಿಕೊಳ್ಳುವ ಷರತ್ತಿಗೊಳಪಟ್ಟು, ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ವಿತರಿಸಲಾದ ಹಣದ ವಿವರವನ್ನು ಕಬ್ಬು ಅಭಿವೃದ್ಧಿ ಆಯುಕ್ತರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 817 ವೆಚ್ಚ–1/12, ದಿನಾಂಕ: 26–07–12ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ್ ನಾಯಕ್ .ಎಲ್**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

PR.1979

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ/ಸಹಕಾರ ಬ್ಯಾಂಕುಗಳಿಂದ ರೈತರು ಪಡೆದಂತಹ ಅಲ್ಪಾವಧಿ ಬೆಳೆ ಸಾಲ ಮನ್ನಾ–2012 ಯೋಜನೆಯಡಿಯಲ್ಲಿ ರೂ.25.000.00 ಕ್ಕೆ ಮೇಲ್ಪಟ್ಟ ಕೃಷಿ ಅಲ್ಪಾವಧಿ ಸಾಲಗಳನ್ನು ಮರುಪಾವತಿಸಲು ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಒ 272 ಸಿಎಲ್‌ಎಸ್ 2012, ದಿನಾಂಕ: 23/08/2012.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ–1/30/12–13, ದಿನಾಂಕ: 03/11/2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ರಾಜ್ಯದ ರೈತರು ಕೃಷಿ ಸಹಕಾರ ಸಂಘಗಳಿಂದ/ಸಹಕಾರ ಬ್ಯಾಂಕುಗಳಿಂದ ದಿನಾಂಕ: 01/08/2011 ರಿಂದ 25/07/2012 ರವರೆಗೆ ಪಡೆದು ದಿನಾಂಕ: 25/07/2012 ಕ್ಕೆ ಬಾಕಿ ಇರುವ ಬೆಳೆ ಸಾಲವನ್ನು ರೂ. 25,000.00 ವರೆಗೆ ಅಸಲು ಮತ್ತು ಅದಕ್ಕೆ ಸಂಬಂಧಪಟ್ಟ ಬಡ್ಡಿಯೊಂದಿಗೆ ಕೆಲವು ಷರತ್ತುಗಳಿಗೊಳಪಟ್ಟು ಸಂಪೂರ್ಣ ಮನ್ನಾ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸಾಲ ಮನ್ನಾ ಘೋಷಣೆ ದಿನಾಂಕ: 25/07/2012 ರಿಂದ ಆದೇಶ ಹೊರಡಿಸಿದ ದಿನಾಂಕ: 23/08/2012 ರ ಅವಧಿಯಲ್ಲಿ ತಗಾದೆಗೆ ಬಂದು ಈ ಅವಧಿಯಲ್ಲಿ ರೂ.25,000.00 ಕ್ಕೆ ಮೇಲ್ಪಟ್ಟ ಮೊತ್ತವನ್ನು ಮರುಪಾವತಿಸದೇ ಇರುವ ರೈತರಿಗೆ ಸದರಿ ಮೊತ್ತವನ್ನು ಮರುಪಾವತಿಸಲು ಹೆಚ್ಚಿನ ಕಾಲಾವಕಾಶವನ್ನು ನೀಡಲು ಮತ್ತು ಮಾರ್ಪಾಡಿತ ಆದೇಶ ಹೊರಡಿಸಿದ ದಿನಾಂಕದಿಂದ 15 ದಿನಗಳ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 272 ಸಿಎಲ್‌ಎಸ್ 2012, ಬೆಂಗಳೂರು, ದಿನಾಂಕ: 14/12/2012.**

ರಾಜ್ಯದ ರೈತರು ಕೃಷಿ ಸಹಕಾರ ಸಂಘಗಳಿಂದ/ ಸಹಕಾರ ಬ್ಯಾಂಕುಗಳಿಂದ ದಿನಾಂಕ: 01/08/2011 ರಿಂದ 25/07/2012 ರವರೆಗೆ ಪಡೆದು ದಿನಾಂಕ: 25/07/2012 ಕ್ಕೆ ಬಾಕಿ ಇರುವ ಬೆಳೆ ಸಾಲವು ದಿನಾಂಕ: 23/08/2012 ರವರೆಗೆ ತಗಾದೆಗೆ ಬಂದು ಈ ಅವಧಿಯಲ್ಲಿ ರೂ.25,000.00 ಕ್ಕೆ ಮೇಲ್ಪಟ್ಟ ಸಾಲವನ್ನು ಮರುಪಾವತಿಸದೇ ಇರುವ ರೈತರು ರೂ. 25,000.00 ಕ್ಕೆ ಮೇಲ್ಪಟ್ಟ ಸಾಲದ ಮೊತ್ತವನ್ನು ಅದಕ್ಕೆ ಅನ್ವಯಿಸುವ ಸಾಮಾನ್ಯ

ಬಡ್ಡಿಯೊಂದಿಗೆ ಈ ಆದೇಶದ ದಿನಾಂಕದಿಂದ 15 ದಿವಸಗಳ ಒಳಗಾಗಿ (ಅಂದರೆ ದಿನಾಂಕ: 29/12/2012 ರೊಳಗಾಗಿ) ಮರುಪಾವತಿಸಿದರೆ ರೂ.25,000.00 ವರೆಗಿನ ಸಾಲ ಮನ್ನಾಕ್ಕೆ ಅರ್ಹರಾಗುತ್ತಾರೆ ಎಂದು ಆದೇಶಿಸಲಾಗಿದೆ.

ಹೀಗೆ ಮನ್ನಾ ಮಾಡಿದ ಮೊತ್ತವನ್ನು ಸಹಕಾರ ಸಂಘಗಳಿಗೆ ಭರಿಸಿ ಕೊಡುವ ಬಗ್ಗೆ ಮೇಲೆ ಓದಲಾದ (1) ರ ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗಳು ಅನ್ವಯವಾಗುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 2296**

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಕೈಗಾರಿಕೆ ವಾಣಿಜ್ಯ ಸಹಕಾರ ಬ್ಯಾಂಕು ನಿ. ಬೆಂಗಳೂರು ಇದಕ್ಕೆ ಎಆರ್‌ಡಿಆರ್ ಸ್ಕೀಮ್ 1990 ರ ಅಡಿಯಲ್ಲಿ ರೂ. 63.79 ಲಕ್ಷ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಸಹಕಾರ ಸಂಘಗಳ ನಿಬಂಧಕರ ಕಛೇರಿ ಬೆಂಗಳೂರು ಇವರ ದಿನಾಂಕ: 01/09/2012 ರ ಪತ್ರ ಸಂಖ್ಯೆ: ಆರ್‌ಸಿಎಸ್/ಬಿಯುಡಿ/ ಕೈ.ವಾ ಬ್ಯಾಂಕ್/ ARDR/2011-12.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರು ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಬ್ಯಾಂಕ್ ನಿಯಮಿತ, ಬೆಂಗಳೂರು, ಇದಕ್ಕೆ ವ್ಯವಸಾಯ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆ (ARDR SCHEME) 1990 ರಡಿಯಲ್ಲಿ ರಾಜ್ಯ ಸರ್ಕಾರ ದಾಯಿತ್ವದ ಮೊತ್ತ 63.79 ಲಕ್ಷಗಳನ್ನು ಪಾವತಿಸಲು ಉಚ್ಚ ನ್ಯಾಯಾಲಯದ ರಿಟ್ ಸಂಖ್ಯೆ: 2415/1992 ರಲ್ಲಿ ಆದೇಶಿಸಲಾಗಿದೆ. ಆದರೆ 12–13 ನೇ ಸಾಲಿನ ಆಯವ್ಯಯದಲ್ಲಿ ಯಾವುದೇ ಉಳಿತಾಯ ಕಂಡುಬರುವುದಿಲ್ಲ. ಆದಾಗ್ಯೂ ಉಚ್ಚ ನ್ಯಾಯಾಲಯದ ಆದೇಶವನ್ನು ಪಾಲನೆ ಮಾಡಲು ಇಲಾಖೆಗೆ 12–13ನೇ ಸಾಲಿನ ಆಯವ್ಯಯದಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಲೆಕ್ಕಶೀರ್ಷಿಕೆ (2425–00–107–02–41) ಯೋಜನೆಯ ಅನುಷ್ಠಾನಕ್ಕಾಗಿ ಹಂಚಿಕೆಯಾಗಿರುವ ಒಟ್ಟು ರೂ. 39,204.41/– ಲಕ್ಷಗಳ ಪೈಕಿ ಸದರಿ ಮೊತ್ತ ರೂ. 63,78,910/–ಗಳನ್ನು ಉಳಿತಾಯವೆಂದು ಪರಿಗಣಿಸಿ, ಈ ಮೊಬಲಗನ್ನು ಸದರಿ ಬ್ಯಾಂಕಿಗೆ ಕರ್ನಾಟಕ ವ್ಯವಸಾಯ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆ 1990 ರಡಿಯಲ್ಲಿ ಸಲ್ಲಿಸಬೇಕಾದ ಕ್ಲೈಮ್ ಮೊತ್ತ ರೂ. 1,25,57,820/– ಗಳ ಪೈಕಿ ಉಚ್ಚ ನ್ಯಾಯಾಲಯದ ತೀರ್ಪಿನ ಮೇರೆಗೆ ಶೇ. 50 ರಷ್ಟು ರಾಜ್ಯ ಸರ್ಕಾರ ದಾಯಿತ್ವದ ಮೊತ್ತ ರೂ. 63,78,910/– ಗಳನ್ನು ಪಾವತಿಸುವಂತೆ ಹಾಗೂ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಗಾಗಿ ಮುಂದೆ ಒದಗಿಸುವ ಪೂರಕ ಹಂಚಿಕೆಗಳಲ್ಲಿ ಈ ಮೊತ್ತವನ್ನು ಸೇರಿಸಿ ಹಂಚಿಕೆ ಮಾಡುವಂತೆ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರಾಜ್ಯ ಸರ್ಕಾರ ದಾಯಿತ್ವದ ಮೊತ್ತವನ್ನು ಬಿಡುಗಡೆ ಮಾಡಲು ತೀರ್ಮಾನಿಸಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 47 ಸಿಆರ್‌ಸಿ 2011, ದಿನಾಂಕ: 17/11/2012**

ಪ್ರಸ್ಥಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಕೈಗಾರಿಕೆ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು, ಇದಕ್ಕೆ ವ್ಯವಸಾಯ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆ (ARDR SCHEME) 1990 ರಡಿಯಲ್ಲಿ ಪಾವತಿಸಬೇಕಾಗಿರುವ ಮೊತ್ತವನ್ನು 12–13ನೇ ಸಾಲಿನ ಪೂರಕ ಅಂದಾಜುಗಳ 2ನೇ ಕಂತಿನಲ್ಲಿ ಲೆಕ್ಕಶೀರ್ಷಿಕೆ 2425–00–108–0–69 –Agriculture and Rural Debt Relief- 100 financial Assistance ) (ಯೋಜನೆ) ಇದರಡಿ ರೂ. 63.79 ಲಕ್ಷಗಳನ್ನು ಒದಗಿಸಿ ಬಿಡುಗಡೆ ಮಾಡಲಾಗಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಪಡೆದ ಮೊತ್ತವನ್ನು ಅಪೆಕ್ಸ್ ಬ್ಯಾಂಕಿನಲ್ಲಿರುವ ಕರ್ನಾಟಕ ರಾಜ್ಯ ಕೈಗಾರಿಕೆ ವಾಣಿಜ್ಯ ಸಹಕಾರ ಬ್ಯಾಂಕ್ ನಿಯಮಿತದ ಚಾಲ್ತಿ ಖಾತೆಗೆ ವರ್ಗಾಯಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 17/10/2012 ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 260 ವೆಚ್ಚ–2/2012, ಸಿಒ 47 ಸಿಆರ್‌ಸಿ 2011 ರಲ್ಲಿ ಸಹಮತಿ ನೀಡಿರುವ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 2201**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ ಹಾಗೂ ತಾಲ್ಲೂಕಿನ ಬಾದನಹಟ್ಟಿ ಏತ ನೀರಾವರಿ ಯೋಜನೆ ಅಭಿವೃದ್ಧಿ ಕಾಮಗಾರಿ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ಸನೀಇ 03 ನಯೋಕಾ 2011 ದಿನಾಂಕ:18.01.201.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವ,ಬಿಜೆಪಿ/ಪಿಬಿ–12/2012–13/5165/ ದಿನಾಂಕ:17.09.2012

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ ಹಾಗೂ ತಾಲ್ಲೂಕಿನ ಬಾದನಹಟ್ಟಿ ಏತ ನೀರಾವರಿ ಯೋಜನೆ ಅಭಿವೃದ್ಧಿ ಕಾಮಗಾರಿ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಸಿವಿಲ್ ಕಾಮಗಾರಿಯನ್ನು ಕೈಗೊಳ್ಳಲು ಕರೆಯಲಾದ ಮೊದಲೆರಡು ಟೆಂಡರ್ ಕರೆಗಳಿಗೆ ಯಾವುದೇ ಪ್ರತಿಕ್ರಿಯೆ ದೊರಕಿರುವುದಿಲ್ಲಾ. ಮೂರನೇ ಬಾರಿಗೆ ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 06.08.2012 |
| ಪ್ರಜಾವಾಣಿ ದಿನ ಪತ್ರಿಕೆ | 03.08.2012 |

ದಿನಾಂಕ:21.08.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ವಿವರಗಳು ಕೆಳಕಂಡಂತಿವೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.43,10,804/– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಬಿ. ಭೈರಪ್ಪ, ಪಿ.ಡಿ.ಹಳ್ಳಿ ಗುತ್ತಿಗೆದಾರರು | 53,44,587/– | 23.98 ಹೆಚ್ಚು |
| ರಾಮಾಂಜನಿ, ಬಳ್ಳಾರಿ ಗುತ್ತಿಗೆದಾರರು | 68,06,018/– | 57.88 ಹೆಚ್ಚು |
| ಎಂ. ಸಿದ್ದರಾಮನ ಗೌಡ, ಬಳ್ಳಾರಿ, ಗುತ್ತಿಗೆದಾರರು | 86,36,535/– | 100.34 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ. ಭೈರಪ್ಪ, ಪಿ.ಡಿ. ಹಳ್ಳಿ ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.23.98ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.43,10,804/–ಗಳ ಮೇಲೆ ಶೇಕಡಾ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.49,14,317/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 74 ಏನೀಯೋ (ತಾಂತ್ರಿಕ) 2012, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ ಹಾಗೂ ತಾಲ್ಲೂಕಿನ ಬಾದನಹಟ್ಟಿ ಏತ ನೀರಾವರಿ ಯೋಜನೆ ಅಭಿವೃದ್ಧಿ ಕಾಮಗಾರಿಯ ಸಿವಿಲ್ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.43,10,804/–ಗಳ ಮೇಲೆ ಶೇಕಡಾ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.49,14,317/–ಗಳಿಗೆ (ರೂ. ನಲವತ್ತೊಂಬತ್ತು ಲಕ್ಷ ಹದಿನಾಲ್ಕು ಸಾವಿರದ ಮುನ್ನೂರ ಹದಿನೇಳು ಮಾತ್ರ)ಗಳಿಗೆ ಶ್ರೀ ಬಿ. ಭೈರಪ್ಪ, ಪಿ.ಡಿ. ಹಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**PR. 2235**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಮಲದಿನ್ನಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(6) (ತಾಂತ್ರಿಕ) ದಿನಾಂಕ:09.07.2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2012–13/5757ದಿನಾಂಕ:19.10.2012

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಮಲದಿನ್ನಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ.275.00ಲಕ್ಷ ಮೊತ್ತದ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದಿಂದ ಅನುನೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 10.08.2012 |
| ಜಿಲ್ಲಾ ಟೆಂಡರ್ ಬುಲೆಟಿನ್ | 13.08.2012 |
| ವಿಜಯ ಕರ್ನಾಟಕ ದಿನ ಪತ್ರಿಕೆ | 14.08.2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 14.08.2012 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 15.08.2012 |

ದಿನಾಂಕ:15.09.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ:25.09.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.2,69,84,602/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.2,84,48,157/– | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ದೇವೀಂದ್ರಪ್ಪ ಗೌಡ ಎಂ.ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು | 3,09,51,895/– | 14.70 ಹೆಚ್ಚು | 8.801 ಹೆಚ್ಚು |

ಮೇಲ್ಕಂಡಂತೆ ಶ್ರೀ ದೇವೀಂದ್ರಪ್ಪ ಗೌಡ ಎಂ.ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 8.801ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಪಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,84,48,157/–ಗಳ ಮೇಲೆ ಶೇಕಡಾ 8.80ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.3,09,51,595/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 115 ಅಪಿಬಿಂ(ತಾಂತ್ರಿಕ) 2012, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಮಲದಿನ್ನಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,84,48,157/–ಗಳ ಮೇಲೆ ಶೇಕಡಾ 8.80ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.3,09,51,595/–ಗಳಿಗೆ (ರೂ. ಮೂರು ಕೋಟಿ ಒಂಬತ್ತು ಲಕ್ಷ ಐವತ್ತೊಂದು ಸಾವಿರದ ಐದು ನೂರ ತೊಂಭತ್ತೈದು ಮಾತ್ರ)ಗಳಿಗೆ ಶ್ರೀ ದೇವೀಂದ್ರಪ್ಪ ಗೌಡ ಎಂ.ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**PR. 2228**

